ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 22ನೇ ಸೆಪ್ಟಂಬರ್, 2020

ಮೈಸೂರು ಲ್ಯಾಂಪ್ಸ್ ಕಂಪನಿಯ ಆಸ್ತಿಯಲ್ಲಿ ಆಸ್ಪತ್ರೆ ನಿರ್ಮಿಸುವ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) -

30 (249) ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಮೈಸೂರು ಲ್ಯಾಂಪ್ಸ್ ಉದ್ಯಮವನ್ನು ಯಾವಾಗ ಎಲ್ಲಿ ಪ್ರಾರಂಭಿಸಲಾಯಿತು; ಇದರ ಇತಿಹಾಸ ಹಾಗೂ ಧ್ಯೇಯೋದ್ದೇಶಗಳೇನು ; (ವಿವರವಾದ ಮಾಹಿತಿ ನೀಡುವುದು)

(ಆ) ಈ ಕಂಪನಿಗೆ ಪ್ರಾರಂಭದಿಂದ ಇಲ್ಲಿಯವರೆಗೂ ಅ.ಒ.ಆ. ಗಳು ಯಾರು ಯಾರು ; ಯಾರ ಕಾಲದಲ್ಲಿ ಕಂಪನಿ ಲಾಭದಲ್ಲಿತ್ತು ಮತ್ತು ಯಾರ ಕಾಲದಲ್ಲಿ ಕಂಪನಿ ನಷ್ಟದಲ್ಲಿತ್ತು ; ನಷ್ಟದಲ್ಲಿರಲು ಕಾರಣಗಳೇನು ; (ವರ್ಷವಾರು ವಿವರವಾದ ಮಾಹಿತಿ ನೀಡುವುದು)

(ಇ) ಮೈಸೂರು ಲ್ಯಾಂಪ್ಸ್ ಕಂಪನಿಯ ಆಸ್ತಿಗಳು ಯಾವುವು ; ಅವುಗಳು ಎಲ್ಲಿವೆ; ಅವುಗಳ ಇಂದಿನ ಮೌಲ್ಯವೇನು ; ಇದರ ಮೇಲೆ ಸರ್ಕಾರದ ಹೊಣೆಗಾರಿಕೆ ಎಷ್ಟಿದೆ ; (ವಿವರವಾದ ಮಾಹಿತಿ ನೀಡುವುದು)

(ಈ) ಈ ಕಂಪನಿಯನ್ನು ಸರ್ಕಾರವು ನೇರವಾಗಿ ತನ್ನ ವಶಕ್ಕೆ ತೆಗೆದುಕೊಳ್ಳದೆ ಮೈಸೂರು ಮಿನರಲ್ಸ್ ಕಂಪನಿಗೆ ಸಂಯೋಜನೆ/ವಿಲೀನಗೊಳಿಸಿ ನಂತರ ಸರ್ಕಾರದ ವಶಕ್ಕೆ ಪಡೆಯುವಂತೆ ಆದೇಶ ಮಾಡಿರಲು ಕಾರಣಗಳೇನು ; (ವಿವರವಾದ ಮಾಹಿತಿಯೊಂದಿಗೆ ಆದೇಶದ ಪ್ರತಿಗಳನ್ನು ನೀಡುವುದು)

(ಉ) ನಗರದ ಹೃದಯ ಭಾಗದಲ್ಲಿರುವ ಕಂಪನಿಯ ಆಸ್ತಿಯನ್ನು ಸರ್ಕಾರವೇ ನೇರವಾಗಿ ತನ್ನ ವಶಕ್ಕೆ ತೆಗೆದುಕೊಂಡು ಉತ್ತರ ಕರ್ನಾಟಕದ ಜನತೆಗೆ ಅನುಕೂಲವಾಗುವಂತೆ ಜಯದೇವ/ವಿಕ್ಟೋರಿಯಾದಂತಹ ಉನ್ನತ ಮಟ್ಟದ ಸರ್ಕಾರಿ ಆಸ್ಪತ್ರೆಯನ್ನು ಕಟ್ಟಲು ಚಿಂತನೆ ನಡೆಸಿದೆಯೇ ?